

# ತಿರ್ಯೊಷೆಚ್ಕ

ಎ. ತೋಲ್ಸ್ತೋಯ್ ಹೇಳಿದಂತೆ
ಒಂದು ರಷ್ಯನ್ ಜಾನಪದಕಥೆ






ಪ್ರಗತಿ ಪ್ರಕಾಶನ

ಮಾಸ್ಕೋ

ಒಂದಾನೊಂದು ಕಾಲದಲ್ಲಿ ಒಬ್ಬ ಅಜ್ಜ ಅಜ್ಜಿ ಇದ್ದರು. ಅವರಿಗೆ ಮಕ್ಕಳೇ ಇರಲಿಲ್ಲ. ಯಾವಾಗಲೂ ತುಂಬ ಒಂಟಿಯಾಗಿಯೇ ಇರುತ್ತಿದ್ದರು.

ಒಂದು ದಿನ ಅಜ್ಜ ಒಂದು ಮರದ ತುಂಡಿನಿಂದ ಒಂದು ಬೊಂಬೆ ಮಾಡಿದ. ಅಜ್ಜಿ ಅದಕ್ಕೆ ತಿರ್‍ಯೊಷಚ್ಕ ಅಂತ ಹೆಸರಿಟ್ಟು, ಅದನ್ನು ತೊಟ್ಟಿಲಲ್ಲಿಟ್ಟು ತೂಗುತ್ತ ಜೋಗುಳ ಹಾಡಿದಳು:





ಮಲಗು ಮಲಗೆಲೆ ಕಂದ ತಿರ್ಯೊಷಚ್ಕ,
ತೆರೆದಿರುವೆಯೇಕಿನ್ನೂ ಚೆಂದದಾ ಕಣ್ಣುಗಳ!
ಮಲಗಿಹವು ಹಕ್ಕಿಗಳು ಹಾಡು ಹಾಡುತಲೆ,
ಮಲಗಿಹವು ಮೊಲ, ತೋಳ, ಕಾಡು ಮಧ್ಯದಲೆ!
ಹೇಳಿಹವು ನಿನಗೂ ಮಲಗೆಂದು,
ಮುದ್ದು ಕಂದನೆ ನೀನು ಮಲಗು ಬೇಗೆಂದು!

ಹೀಗೆ ಅನೇಕ ದಿನಗಳು ಕಳೆದವು. ಆ ಮರದ ಬೊಂಬೆ ನಿಧಾನವಾಗಿ ಒಂದು ಜೀವಂತ ಮಗುವಾಗಿಯೇ ಬದಲಾಗತೊಡಗಿತು. ತಿರ್‍ಯೊಷಚ್ಕ ಒಬ್ಬ ಬುದ್ಧಿವಂತನಾದ ದೊಡ್ಡ ಹುಡುಗನಾದ.





ಅಜ್ಜ ಹುಡುಗನಿಗೆ ಆಡೋದಕ್ಕೆ ಒಂದು ದೋಣಿಯನ್ನು ಮಾಡಿಕೊಟ್ಟ. ಅದಕ್ಕೆ ಬಿಳಿ ಬಣ್ಣ ಬಳಿದ. ಒಂದು ಜೊತೆ ಹುಟ್ಟುಗಳನ್ನೂ ಮಾಡಿ ಅವಕ್ಕೆ ಕೆಂಪು ಬಣ್ಣ ಹಚ್ಚಿದ.

ತಿರ್‍ಯೊಷಚ್ಕನಿಗೆ ತುಂಬ ಸಂತೋಷವಾಯಿತು. ಅವನು ದೋಣಿಯಲ್ಲಿ ಕುಳಿತು ಅದಕ್ಕೆ ಹೇಳುತ್ತಾನೆ:

ದೋಣಿ, ದೋಣಿ, ದೂರದೂರ ತೇಲಿಕೊಂಡು ಹೋಗು,
ಹೆಚ್ಚು ಮೀನು ಇರೋ ಜಾಗಕ್ಕೆ ಕರಕೊಂಡು ಹೋಗು!

ಪುಟ್ಟ ಬಿಳಿ ದೋಣಿ ಅವನನ್ನು ದೂರದವರೆಗೂ ಕರೆದುಕೊಂಡು ಹೋಯಿತು. ಅವನು ಪ್ರತಿದಿನವೂ ಮೀನು ಹಿಡಿಯುವುದಕ್ಕೆ ಹೋಗುತ್ತಿದ್ದ. ಮಧ್ಯಾಹ್ನ ಅವನ ತಾಯಿ ಅವನಿಗೆ ಊಟ ತರುತ್ತಿದ್ದಳು.





ಅವಳು ನದಿಯ ದಡದಲ್ಲಿ ನಿಂತು ಕೂಗಿ ಕರೀತಾಳೆ:

ಬಾ ಮಗು, ಬಾ ಊಟಕ್ಕೆ ಮುದ್ದು ತಿರ್ಯೊಷಚ್ಕ,
ತಂದಿಹೆನು ನಿನಗಾಗಿ ಕೆನೆಹಾಲು ಮೊಸರು,
ಬಿಸಿ ರೊಟ್ಟಿಗಿಹುದು, ಸಿಹಿ ಜೇನುತುಪ್ಪ!

ದೂರದಿಂದಲೇ ತಾಯಿಯ ಧ್ವನಿ ಕೇಳಿದ ತಿರ್ಯೊಷಚ್ಕ ಬೇಗ ಬೇಗ ದಡಕ್ಕೆ ಬರುತ್ತಾನೆ. ತಾಯಿ ಮೀನುಗಳನ್ನು ಬುಟ್ಟಿಗೆ ಹಾಕಿಕೊಳ್ಳುತ್ತಾಳೆ, ಅವನಿಗೆ ಊಟ ಕೊಡುತ್ತಾಳೆ, ಅವನ ಬಟ್ಟೆ ಬದಲಾಯಿಸಿ ಅವನನ್ನು ಮತ್ತೆ ಮೀನು ಹಿಡಿಯಲು ಹೋಗೋದಕ್ಕೆ ಬಿಡುತ್ತಾಳೆ.



ಆ ಊರಿನ ಬಳಿ ಕಾಡಿನಲ್ಲಿ ಒಬ್ಬ ಮಾಟಗಾತಿ ಇದ್ದಳು. ಅವಳು ಇದನ್ನೆಲ್ಲ ನೋಡಿಕೊಂಡು, ಒಂದು ದಿನ ನದಿಯ ದಡಕ್ಕೆ ಹೋಗಿ ಗೊಗ್ಗರು ಧ್ವನಿಯಲ್ಲಿ ಕೂಗಿ ಕರೀತಾಳೆ:

ಬಾ ಮಗು, ಬಾ ಊಟಕ್ಕೆ, ಮುದ್ದು ತಿರ್‍ಯೊಷಚ್ಕ
ತಂದಿಹೆನು ನಿನಗಾಗಿ ಕೆನೆಹಾಲು ಮೊಸರು,
ಬಿಸಿ ರೊಟ್ಟಿಗಿಹುದು, ಸಿಹಿ ಜೇನುತುಪ್ಪ!

ತಿರ್‍ಯೊಷಚ್ಕನಿಗೆ ಗೊತ್ತಾಯಿತು ಅದು ತನ್ನ ತಾಯಿಯ ಧ್ವನಿ ಅಲ್ಲ ಅಂತ. ಅವನು ಹೇಳುತ್ತಾನೆ:

ದೋಣಿ, ದೋಣಿ, ದೂರದೂರ ತೇಲಿಕೊಂಡು ಹೋಗು,
ಅಮ್ಮನಲ್ಲ ನನ್ನನ್ನು ಕರೀತಿರೋದು.





ಮಾಟಗಾತಿಗೆ ಕೋಪ ಬಂತು. ಅವಳು ಕೂಡಲೇ ಕಮ್ಮಾರನ ಬಳಿಗೆ ಓಡಿದಳು. ತನ್ನ ಧ್ವನಿ ತಿರ್ಯೊಷಚ್ಕನ ತಾಯಿಯ ಧ್ವನಿಯಂತೆಯೇ ಮಧುರವಾಗಿ ಇರುವ ಹಾಗೆ ತನ್ನ ಕಂಠಕ್ಕೆ ಹೊಸ ರೂಪ ಕೊಡುವಂತೆ ಕಮ್ಮಾರನಿಗೆ ಹೇಳಿದಳು.



ಕಮ್ಮಾರ ಅವಳ ಕಂಠವನ್ನು ಬದಲಿಸಿದ. ಮಾಟಗಾತಿ ಮತ್ತೆ ದಡಕ್ಕೆ ಹೋಗಿ ತಿರ್‍ಯೊಷಚ್ಕನ ಪ್ರೀತಿಯ ತಾಯಿಯ ಧ್ವನಿಯಲ್ಲೇ ಸರಿಯಾಗಿ ಕೂಗಿ ಕರೆದಳು:

ಬಾ ಮಗು, ಬಾ ಊಟಕ್ಕೆ, ಮುದ್ದು ತಿರ್‍ಯೊಷಚ್ಕ
ತಂದಿಹೆನು ನಿನಗಾಗಿ ಕೆನೆಹಾಲು ಮೊಸರು,
ಬಿಸಿ ರೊಟ್ಟಿಗಿಹುದು, ಸಿಹಿ ಜೇನುತುಪ್ಪ !



ಈಗ ತನ್ನ ತಾಯಿಯೇ ಕರೆಯುತ್ತಿರೋದು ಅಂತ ತಿರ್‍ಯೊಷಚ್ಕ ಅಂದುಕೊಂಡ. ಅವನು ಹುಟ್ಟು ಹಾಕಿಕೊಂಡು ದಡಕ್ಕೆ ಬಂದ.

ಮಾಟಗಾತಿ ತಕ್ಷಣವೇ ಅವನನ್ನು ಹಿಡಿದು ತನ್ನ ಚೀಲದೊಳಕ್ಕೆ ತುರುಕಿಕೊಂಡಳು. ಕಾಡಿನಲ್ಲಿರೋ ತನ್ನ ಮನೆಗೆ ಕರೆದುಕೊಂಡು ಹೋಗಿ ಮಗಳು ಅಲ್ಯೋಂಕಾಗೆ ಹೇಳಿದಳು: "ಬೇಗ ಒಲೆ ಹಚ್ಚು. ಈ ತಿರ್‍ಯೊಷಚ್ಕನನ್ನು ಚೆನ್ನಾಗಿ ಬೇಯಿಸು. ಇವತ್ತು ರಾತ್ರಿಗೆ ನನಗೆ ಇವನೇ ಊಟ. ನಾನು ಹೊರಗೆ ಹೋಗಿ ಬರುತ್ತೇನೆ."

ಅಲ್ಯೋಂಕಾ ಒಲೆ ಹೊತ್ತಿಸಿದಳು. ಒಲೆ ಚೆನ್ನಾಗಿ ಕಾದ ಮೇಲೆ ಅವಳು ತಿರ್ಯೊಷಚ್ಕನಿಗೆ ಹೇಳುತ್ತಾಳೆ:

"ಮೊರಗುದ್ದಲಿಯ ಮೇಲೆ ಮಲಗಿಕೊ."

ಅವನು ಅದರ ಮೇಲೆ ಹೋಗಿ ಕುಳಿತ. ಮಲಗುವ ಬದಲು ತನ್ನ ಕೈ ಕಾಲುಗಳನ್ನು ಆಗಲವಾಗಿ ಚಾಚಿ ಕುಳಿತ. ಅವಳು ಎಷ್ಟೇ ಪ್ರಯತ್ನ ಪಟ್ಟರೂ ಅವನನ್ನು ಒಲೆಯೊಳಕ್ಕೆ ದೂಕಲು ಆಗಲಿಲ್ಲ.

"ಮಲಗಿಕೊ ಅಂತ ಹೇಳಲಿಲ್ಲವೇ ನಾನು. ಹುಂ, ಮಲಗಿಕೊ," ಅವಳು ಗದರಿಸಿದಳು.

"ಹೇಗೆ ಮಲಗಬೇಕೋ ನನಗೆ ಗೊತ್ತಿಲ್ಲ. ನೀನು ತೋರಿಸಿಕೊಡು..." ತಿರ್ಯೊಷಚ್ಕ ಹೇಳಿದ.

"ಬೆಕ್ಕು, ನಾಯಿ ಮಲಗೊಲ್ವೇ, ಹಾಗೇ ಮಲಗು."

"ನಂಗೊತ್ತಿಲ್ಲ. ನೀನು ಮಲಗಿ ತೋರಿಸು."





ಅಲ್ಯೋಂಕಾ ಮೊರಗುದ್ದಲಿಯ ಮೇಲೆ ಮಲಗಿದಳು. ತಿರ್ಯೊಷಚ್ಕ ತಕ್ಷಣವೇ ಅವಳನ್ನು ಒಲೆಯೊಳಕ್ಕೆ ದೂಕಿ ಬಾಗಿಲು ಹಾಕಿದ. ಹೊರಗೆ ಓಡಿ ಪಕ್ಕದಲ್ಲೇ ಇದ್ದ ಎತ್ತರವಾದ ಓಕ್ ಮರದ ಮೇಲೆ ಹತ್ತಿ ಕುಳಿತ.

ಮಾಟಗಾತಿ ಒಲೆಯ ಬಾಗಿಲು ತೆರೆದಳು. ಚೆನ್ನಾಗಿ ಬೆಂದಿದ್ದ ಅಲ್ಯೋಂಕಾಳನ್ನು ಗಬಗಬನೆ ತಿಂದು ಹಾಕಿದಳು. ಹೊಟ್ಟೆ ಭಾರವಾಯಿತು. ಹೊರಗೆ ಬಂದು ಹುಲ್ಲಿನ ಮೇಲೆ ಹೊರಳಾಡುತ್ತ ಸಂತೋಷ ದಿಂದ ಹಾಡುತ್ತಾಳೆ:

"ಹೊರಳಾಡ್ತೀನಿ, ಉರುಳಾಡ್ತೀನಿ, ಹೊಟ್ಟೆ ತುಂಬ ತುಂಬಿಕೊಂಡಿದೀನಿ ತಿರ್ಯೊಷಚ್ಕನ ಮಾಂಸವನ್ನು."

ಓಕ್ ಮರದ ಮೇಲೆ ಕುಳಿತಿದ್ದ ತಿರ್ಯೊಷಚ್ಕ ಮೆಲ್ಲಗೆ ಪ್ರತಿಹೇಳುತ್ತಾನೆ:

"ತುಂಬಿಕೊಂಡಿದೀಯ ನೀನು ಹೊಟ್ಟೆ ತುಂಬ ಅಲ್ಯೋಂಕಾಳ ಮಾಂಸವನ್ನು!"

ಮಾಟಗಾತಿ ಬೆಚ್ಚುಬಿದ್ದಳು. ಏನು ಶಬ್ದ ಇದು, ಗಾಳಿಯಲ್ಲಿ ಮರದ ಎಲೆಗಳದೆ? ಅವಳು ಮತ್ತೆ ಹಾಡುತ್ತಾಳೆ:

"ಹೊರಳಾಡ್ತೀನಿ, ಉರುಳಾಡ್ತೀನಿ, ಹೊಟ್ಟೆ ತುಂಬ ತುಂಬಿಕೊಂಡಿದೀನಿ ತಿರ್ಯೊಷಚ್ಕನ ಮಾಂಸವನ್ನು."

ತಿರ್ಯೊಷಚ್ಕ ಮತ್ತೆ ಹೇಳುತ್ತಾನೆ:

"ತುಂಬಿಕೊಂಡಿದೀಯ ನೀನು ಹೊಟ್ಟೆ ತುಂಬ ಅಲ್ಯೋಂಕಾಳ ಮಾಂಸವನ್ನು!"

ಮಾಟಗಾತಿ ಎದ್ದು ನೋಡಿದಳು. ತಿರ್ಯೊಷಚ್ಕನನ್ನು ಮರದ ಮೇಲೆ ಕಂಡಳು. ಮರವನ್ನು ಹಲ್ಲಿನಿಂದ ಕಡಿದು ಹಾಕುವುದಕ್ಕೆ ನೋಡಿದಳು. ಕಡಿದಳೂ, ಕಡಿದಳೂ, ಅವಳ ಮೇಲಿನ ಎರಡು ಹಲ್ಲು ಮುರಿದವು. ಅವಳು ತಕ್ಷಣವೇ ಕಮ್ಮಾರನ ಬಳಿಗೆ ಓಡಿದಳು.





"ಕಮ್ಮಾರ, ಕಮ್ಮಾರ. ನನಗೆ ಎರಡು ಕಬ್ಬಿಣದ ಹಲ್ಲು ಮಾಡಿಕೊಡು, ಬೇಗ."

ಕಮ್ಮಾರ ಅವಳಿಗೆ ಎರಡು ಕಬ್ಬಿಣದ ಹಲ್ಲು ಮಾಡಿಕೊಟ್ಟ. ಅವಳು ಮತ್ತೆ ಮರವನ್ನು ಕಡಿದುಹಾಕಲು ಹೋದಳು. ಕಡಿದಳೂ, ಕಡಿದಳೂ, ತನ್ನ ಕೆಳಗಿನ ಎರಡು ಹಲ್ಲು ಮುರಿದುಕೊಂಡಳು.

ಅವಳು ಮತ್ತೆ ಕಮ್ಮಾರನ ಬಳಿಗೆ ಓಡಿದಳು. "ಕಮ್ಮಾರ, ಕಮ್ಮಾರ. ನನಗೆ ಇನ್ನೆರಡು ಕಬ್ಬಿಣದ ಹಲ್ಲು ಮಾಡಿಕೊಡು!" ಕಮ್ಮಾರ ಇನ್ನೆರಡು ಹಲ್ಲು ಮಾಡಿಕೊಟ್ಟ.

ಈಗ ಅವಳು ಮರವನ್ನು ಗಟ್ಟಿಯಾಗಿ ಕಡಿಯುತೊಡಗಿದಳು. ಮರದ ಚಕ್ಕೆಗಳು ಆ ಕಡೆ ಈ ಕಡೆ ಹಾರ ತೊಡಗುತ್ತವೆ. ಮರ ಆಗಲೇ ಕಟಕಟ ಅಂತ ಶಬ್ದ ಮಾಡುತ್ತಾ ಇದೆ, ತೂರಾಡುತ್ತಾ ಇದೆ.



ಈಗ ಏನು ಮಾಡಬೇಕು? ತಿರ್ಯೊಷಚ್ಕ ನೋಡುತ್ತಾನೆ: ಮೇಲೆ ಬಾತುಕೋಳಿಗಳ ಒಂದು ಹಿಂಡು ಹಾರಿ ಹೋಗುತ್ತಾ ಇದೆ. ಅವುಗಳನ್ನು ಕೇಳುತ್ತಾನೆ:

"ಓ ನನ್ನ ಗೆಳೆಯರೇ, ಬಾತುಕೋಳಿಗಳೇ, ಕೂರಿಸಿಕೊಳ್ಳಿರೆನ್ನನು ನಿಮ್ಮ್ರಯ ರೆಕ್ಕೆಗಳ ಮೇಲೆ, ಕರೆದೊಯ್ಯಿರೆನ್ನನು ಎನ್ನಮ್ಮ್ರನ ಬಳಿಗೆ!"

ಬಾತುಕೋಳಿಗಳು ಉತ್ತರಿಸುತ್ತವೆ:

"ನಮ್ಮ್ರ ಹಿಂದೆಯೇ ಇನ್ನೊಂದು ಹಿಂಡು ಬರುತ್ತಾ ಇದೆ. ಅವೂ ನಮ್ಮ್ರ ಗುಂಪಿನವೇ. ಅವು ನಿನ್ನನ್ನು ಕರೆದೊಯ್ಯುತ್ತವೆ."

ಮಾಟಗಾತಿ ಮರವನ್ನು ಕಡೀತಾನೇ ಕಡೀತಾನೇ ಇದಾಳೆ. ಎರಡು ಸಾರಿ ಕಡಿಯೋದು, ತಿರ್ಯೊಷಚ್ಕನನ್ನು ಒಂದು ಸಾರಿ ನೋಡೋದು, ಬಾಯಿ ಚಪ್ಪರಿಸುವುದು, ಮತ್ತೆ ಮರವನ್ನು ಕಡಿಯೋದು...

ಬಾತುಕೋಳಿಗಳ ಇನ್ನೊಂದು ಹಿಂಡೂ ಬರುತ್ತೆ. ತಿರ್ಯೊಷಚ್ಕ ಅವುಗಳನ್ನೂ ಕೇಳುತ್ತಾನೆ:

"ಓ ನನ್ನ ಗೆಳೆಯರೇ, ಬಾತುಕೋಳಿಗಳೇ, ಕೂರಿಸಿಕೊಳ್ಳಿರೆನ್ನನು ನಿಮ್ಮಯ ರೆಕ್ಕೆಗಳ ಮೇಲೆ, ಕರೆದೊಯ್ಯಿರೆನ್ನನು ಎನ್ನಮ್ಮನ ಬಳಿಗೆ!"

ಬಾತುಕೋಳಿಗಳು ಉತ್ತರಿಸುತ್ತವೆ:

"ನಮ್ಮ ಹಿಂದೆ ಒಂದು ಎಳೆಯ ಬಾತುಕೋಳಿ ಬರುತ್ತಾ ಇದೆ. ಅದು ನಿನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗುತ್ತೆ!"

ಮಾಟಗಾತಿ ಇನ್ನೊಂದು ಸ್ವಲ್ಪ ಕಡಿದರೆ ಸಾಕು, ಮರ ಮುರಿದು ಬೀಳುತ್ತೆ.





ಆ ಹೊತ್ತಿಗೆ ಸರಿಯಾಗಿ ಆ ಎಳೆಯ ಬಾತುಕೋಳಿ ಬರುತ್ತೆ. ತಿರ್‍ಯೊಷಚ್ಕ ಅದನ್ನೂ ಕೇಳಿಕೊಳ್ಳುತ್ತಾನೆ:

"ಬಾತುಕೋಳಿಗಳಲ್ಲೆಲ್ಲ ತುಂಬ ಕರುಣಾಳು ನೀನು, ಕರೆದೊಯ್ಯಿ ನನ್ನನ್ನು ಎನ್ನಮ್ಮನ ಬಳಿಗೆ!"

ತಿರ್‍ಯೊಷಚ್ಕನ ಸ್ಥಿತಿಯನ್ನು ಕಂಡು ಆ ಬಾತುಕೋಳಿಗೆ ಕರುಣೆ ಬಂತು. ಅದು ಕೆಳಕ್ಕೆ ಹಾರಿ ಬಂದು ಅವನನ್ನು ತನ್ನ ಮೇಲೆ ಕೂರಿಸಿಕೊಂಡು ಅವನ ಅಮ್ಮನ ಮನೆಯ ಬಳಿಗೆ ಕರೆದೊಯ್ದಿತು.



ಅವರು ಮನೆಯ ಬಳಿ ಸರಿಯಾಗಿ ಕಿಟಕಿಯ ಕೆಳಗಿದ್ದ ಹುಲ್ಲಿನ ಮೇಲೆ ಬಂದಿಳಿದರು.

ಅಜ್ಜಿ ತಿರ್‍ಯೊಷಚ್ಕನನ್ನು ಜ್ಞಾಪಿಸಿಕೊಂಡು ಒಂದಿಷ್ಟು ಸೀದೋಸೆ ಮಾಡಿದ್ದಳು. ಅಜ್ಜನಿಗೆ ಒಂದು ಸೀದೋಸೆ ಕೊಡುತ್ತ ಹೇಳಿದಳು:

"ತಗೊಳ್ಳಿ. ಇದು ನಿಮಗೆ, ಇದು ನನಗೆ."

"ನನಗೆ ದೋಸೆ?" ತಿರ್ಯೊಷಚ್ಕ ಕಿಟಕಿಯ ಕೆಳಗಿಂದ ಹೇಳಿದ.
ಅಜ್ಜಿಗೆ ಅವನ ಮಾತು ಕೇಳಿಸಿತು. ಅಜ್ಜನಿಗೆ ಹೇಳುತ್ತಾಳೆ:
"ಹೊರಗೆ ಹೋಗಿ ನೋಡಿ. ಯಾರೋ ದೋಸೆ ಬೇಕೂಂತ ಕೇಳುತ್ತಿದ್ದಾರೆ."





ಅಜ್ಜ ಹೊರಗೆ ಹೋಗಿ ನೋಡುತ್ತಾನೆ – ತಿರ್‍ಯೊಷಚ್ಕ ! ಅವನನ್ನು ಅಜ್ಜಿಯ ಬಳಿಗೆ ಕರೆದೊಯ್ದ. ಅವಳಿಗೆ ಆನಂದವೋ ಆನಂದ. ತನ್ನ ಮುದ್ದು ಮಗನಿಗೆ ಎಷ್ಟು ಮುತ್ತುಕೊಟ್ಟರೂ ಸಾಲದು, ಎಷ್ಟು ಮುದ್ದಾಡಿದರೂ ಸಾಲದು !



ಅವರು ಎಳೆಯ ಬಾತುಕೋಳಿಗೆ ಬೇಕಾದಷ್ಟು ತಿನ್ನುವುದಕ್ಕೂ ಕುಡಿಯುವುದಕ್ಕೂ ಕೊಟ್ಟರು. ದೊಡ್ಡದಾದ ಬಲಶಾಲಿಯಾದ ಹಕ್ಕಿಯಾಗಿ ಬೆಳೆಯುವವರೆಗೂ ತಮ್ಮ ಅಂಗಳದಲ್ಲೇ ಸ್ವತಂತ್ರವಾಗಿ ಓಡಾಡಿಕೊಂಡಿರುವುದಕ್ಕೆ ಬಿಟ್ಟುಕೊಟ್ಟರು. ಅದೀಗ ತಾನೇ ಒಂದು ಹಕ್ಕಿಗಳ ಹಿಂಡಿನ ನಾಯಕನಾಗಿದೆ. ಅಗಲವಾದ ರೆಕ್ಕೆಗಳನ್ನು ಪಟಪಟನೆ ಹೊಡೆಯುತ್ತ ಹಾರಾಡುತ್ತೆ. ತಿರ್ಯೊಷಚ್ಕನನ್ನು ಆಗಾಗ್ಗೆ ನೆನಪಿಸಿಕೊಳ್ಳುತ್ತಿರುತ್ತೆ.



ಅನುವಾದ: ಗೋಪಾಲಕೃಷ್ಣರಾವ್

ಚಿತ್ರಗಳು: ವೈ. ಕರೋವಿನ್

ТЕРЁШЕЧКА

Русская народная сказка в обработке А. Толстого

*на языке каннада*

Т $\frac{70801-837}{014(01)-80}$ без объявл. 4803000000



ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು